# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 627 |
| ಸದಸ್ಯರ ಹೆಸರು | : | ಶ್ರೀ ಕೆ.ಟಿ.ಶ್ರೀಕಂಠೇಗೌಡ |
| ಉತ್ತರಿಸಬೇಕಾದ ದಿನಾಂಕ | : | 17-12-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಯ ವಸತಿ ಶಿಕ್ಷಣ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅತಿಥಿ ಶಿಕ್ಷಕರು ಎಷ್ಟು: (ವಿವರ ನೀಡುವುದು) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿಯಲ್ಲಿನ ವಸತಿ ಶಾಲೆ/ಕಾಲೇಜುಗಳಲ್ಲಿ ಒಟ್ಟು 2213 ಅತಿಥಿ ಶಿಕ್ಷಕರು/ಉಪನ್ಯಾಸಕರು ಕಾರ್ಯ ನಿರ್ವಹಿಸುತ್ತಿದ್ದಾರೆ. ವೃಂದವಾರು ವಿವರವನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ) | ಇವರು ಎಷ್ಟು ವರ್ಷಗಳಿಂದ ಕೆಲಸ ನಿರ್ವಹಿಸುತ್ತಿದ್ದಾರೆ. ಇವರ ವೇತನ ಎಷ್ಟು: | ಜಿಲ್ಲಾ ಮಟ್ಟದ ಅಧಿಕಾರಿಗಳ ಮೂಲಕ ಅತಿಥಿ ಶಿಕ್ಷಕರು/ ಉಪನ್ಯಾಸಕರ ಹುದ್ದೆಗಳಿಗೆ ಅರ್ಜಿ ಆಹ್ವಾನಿಸಿ, ಅಭ್ಯರ್ಥಿಯ ವಿದ್ಯಾರ್ಹತೆ, ಅನುಭವ, ಬೋಧನಾ ಸಾಮರ್ಥ್ಯ ಮತ್ತು ವಿಧಾನ, ಸಂದರ್ಶನ ಮತ್ತಿತರ ಮಾನದಂಡಗಳ ಆಧಾರದ ಮೇಲೆ ಅರ್ಹ ಅತಿಥಿ ಶಿಕ್ಷಕರನ್ನು ಜಿಲ್ಲಾ ಹಂತದಲ್ಲಿ ಆಯ್ಕೆ ಮಾಡಿಕೊಳ್ಳಲಾಗುತ್ತಿದೆ.<br><br>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿಯಲ್ಲಿನ ವಸತಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಶಿಕ್ಷಕರಿಗೆ ಮಾಹೆಯಾನ ರೂ ರೂ 10,000/- ಹಾಗೂ ವಸತಿ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಮಾಹೆಯಾನ 12,000/- ರೂಗಳಂತೆ ಅತಿಥಿ ಶಿಕ್ಷಕರು/ಉಪನ್ಯಾಸಕರು ಗಳಿಗೆ ವೇತನ ಪಾವತಿ ಮಾಡಲಾಗುತ್ತಿದೆ. |
| ಇ) | ಇವರ ಸೇವೆಯನ್ನು ಖಾಯಂ ಮಾಡುವಂತೆ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಆದೇಶಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ WP No:12562-12564/2018, WP No 46240/2018, WP No 45714-45716/2018, 52876/2018 & 1412-1546/2019ರ ಪ್ರಕರಣಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಅಂತಿಮ ಆದೇಶವನ್ನು ನೀಡಿರುತ್ತದೆ.<br><br>" the third respondent is directed to consider the representation of the petitioners strictly in accordance with law. The writ petitions stand disposed off accordingly. The interim order granted earlier shall stand dissolved". ಎಂದು |
| ಈ) | ಇವರುಗಳನ್ನು ಖಾಯಂಗೊಳಿಸಲು ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆ? (ಮಾಹಿತಿ ನೀಡುವುದು) | |

| | | |
|---|---|---|
| | | ಆದೇಶಿಸಲಾಗಿರುವುದು ಸರ್ಕಾರದ ಗಮನದಲ್ಲಿರುತ್ತದೆ.<br><br>ಮಾನ್ಯ ನ್ಯಾಯಾಲಯದ ಆದೇಶದಂತೆ ಅತಿಥಿ ಶಿಕ್ಷಕರ ಮನವಿಗಳನ್ನು ಪರಿಶೀಲಿಸಿ, ಅತಿಥಿ ಶಿಕ್ಷಕರನ್ನು ಪೂರ್ಣ ಕಾಲಿಕ ಶಿಕ್ಷಕರನ್ನಾಗಿ ಖಾಯಂಗೊಳಿಸಲು ನಿಯಮಾನುಸಾರ ಅವಕಾಶವಿರುವುದಿಲ್ಲ. ಹಾಗೂ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂಧ ಮತ್ತು ನೇಮಕಾತಿ ನಿಯಮದಲ್ಲಿ ಅತಿಥಿ ಶಿಕ್ಷಕರನ್ನು ಖಾಯಂಗೊಳಿಸಲು ಅವಕಾಶವಿರುವುದಿಲ್ಲ ಎಂದು ಹಿಂಬರಹವನ್ನು ನೀಡಲಾಗಿರುತ್ತದೆ. ಆದ್ದರಿಂದ ಅತಿಥಿ ಶಿಕ್ಷಕರನ್ನು ಖಾಯಂಗೊಳಿಸಲು ನಿಯಮಾನುಸಾರ ಅವಕಾಶವಿರುವುದಿಲ್ಲ. |

**ಸಂಖ್ಯೆ: ಸಕಇ 550 ಮೊದೇಶಾ 2021**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

## ಅನುಬಂಧ-1

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ 577(627)ಕ್ಕೆ

| ಕ್ರ.ಸಂ | ಹುದ್ದೆ | ಸಂಖ್ಯೆ |
|---|---|---|
| 1 | ಪ್ರಾಂಶುಪಾಲರು | 0 |
| 2 | ಕನ್ನಡ ಭಾಷಾ ಶಿಕ್ಷಕರು | 187 |
| 3 | ಆಂಗ್ಲ ಭಾಷಾ ಶಿಕ್ಷಕರು | 348 |
| 4 | ಹಿಂದಿ ಭಾಷಾ ಶಿಕ್ಷಕರು | 286 |
| 5 | ಗಣಿತ ಶಿಕ್ಷಕರು | 231 |
| 6 | ವಿಜ್ಞಾನ ಶಿಕ್ಷಕರು | 199 |
| 7 | ಸಮಾಜ ವಿಜ್ಞಾನ ಶಿಕ್ಷಕರು | 122 |
| 8 | ಕಂಪ್ಯೂಟರ್ ಶಿಕ್ಷಕರು | 212 |
| 9 | ದೈಹಿಕ ಶಿಕ್ಷಣ ಶಿಕ್ಷಕರು | 178 |
| 10 | ಡ್ರಾಯಿಂಗ್ ಶಿಕ್ಷಕರು | 0 |
| 11 | ಸಂಗೀತ ಶಿಕ್ಷಕರು | 38 |
| 12 | ಕನ್ನಡ ಭಾಷಾ ಉಪನ್ಯಾಸಕರು | 59 |
| 13 | ಆಂಗ್ಲ ಭಾಷಾ ಉಪನ್ಯಾಸಕರು | 62 |
| 14 | ಭೌತಶಾಸ್ತ್ರ ಉಪನ್ಯಾಸಕರು | 57 |
| 15 | ಗಣಿತ ಉಪನ್ಯಾಸಕರು | 60 |
| 16 | ರಸಾಯನಶಾಸ್ತ್ರ ಉಪನ್ಯಾಸಕರು | 59 |
| 17 | ಜೀವಶಾಸ್ತ್ರ ಉಪನ್ಯಾಸಕರು | 57 |
| 18 | ಗಣಿತ ವಿಜ್ಞಾನ ಉಪನ್ಯಾಸಕರು | 58 |
| ಒಟ್ಟು | | **2213** |